## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | **1227** |
| ಸದಸ್ಯರ ಹೆಸರು | : | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 17-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯ ವಿರಾಜಪೇಟೆ ಪಟ್ಟಣ ಪಂಚಾಯತಿ ವ್ಯಾಪ್ತಿಯ ಮಲೆತಿರಿಕೆ ಬೆಟ್ಟ, ನೆಹರು ನಗರ ಮತ್ತು ಅರಸು ನಗರದ ಸಮೀಪದಲ್ಲಿ 2018ರಲ್ಲಿ 200 ಮೀಟರ್ ಆಳದ ಬಿರುಕು ಕಾಣಿಸಿಕೊಂಡ ಕಾರಣದಿಂದಾಗಿ ಸದರಿ ಪ್ರದೇಶವು ಅಪಾಯಕಾರಿಯಾಗಿದ್ದು, ಜನವಸತಿಗೆ ಸುರಕ್ಷಿತವಲ್ಲ ಎಂಬ ವರದಿಯ ಹಿನ್ನಲೆಯಲ್ಲಿ ಸ್ಥಳೀಯ ನಿವಾಸಿಗಳು ಭಯದ ವಾತಾವರಣದಲ್ಲಿ ಕಳೆದ ಮೂರು ವರ್ಷಗಳಿಂದ ಬದುಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಸುರಕ್ಷಿತವಲ್ಲದ ಈ ಪ್ರದೇಶದಲ್ಲಿ ವಾಸಿಸುತ್ತಿರುವ ನಿವಾಸಿಗಳನ್ನು ಸುರಕ್ಷಿತ ಪ್ರದೇಶಕ್ಕೆ ಶಾಶ್ವತವಾಗಿ ಸ್ಥಳಾಂತರ ಮಾಡಿ ಸೂಕ್ತ ಪರಿಹಾರ ಒದಗಿಸಲು ಸರ್ಕಾರ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೂ ಕ್ರಮ ವಹಿಸದಿರಲು ಕಾರಣಗಳೇನು; | ಕೊಡಗು ಜಿಲ್ಲೆಯ ವಿರಾಜಪೇಟೆ ಪಟ್ಟಣ ಪಂಚಾಯತಿ ವ್ಯಾಪ್ತಿಯ ಮಲೆತಿರಿಕೆ ಬೆಟ್ಟದಲ್ಲಿ ಸುರಕ್ಷಿತವಲ್ಲದ ಸ್ಥಳದಲ್ಲಿ ವಾಸಿಸುತ್ತಿರುವವರಿಗೆ ಪುನರ್ವಸತಿ ಕಲ್ಪಿಸಲು ಸ್ಥಳೀಯವಾಗಿ ಸರ್ಕಾರಿ ಜಮೀನು ಲಭ್ಯವಿಲ್ಲದರಿಂದ ವಿರಾಜಪೇಟೆ ಪಟ್ಟಣ ಪಂಚಾಯತಿಯಿಂದ ಸಾರ್ವಜನಿಕ ಪ್ರಕಟಣೆ ಹೊರಡಿಸಿ ಬಿಟ್ಟಂಗಾಲದ ಅಂಬಟ್ಟಿ ಗ್ರಾಮದಲ್ಲಿ ಜಾಗವನ್ನು ಖರೀದಿಸಲು ಗುರುತಿಸಲಾಗಿದ್ದು, ಖರೀದಿ ಪ್ರಸ್ತಾವನೆ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |
| (ಇ) | ಅತಿಯಾದ ಮಳೆ ಬಂದಲ್ಲಿ ಮಡ್ ಫ್ಲೋ ಆಗುತ್ತಾ ಬೆಟ್ಟ ಜಾರಿ, ಜೀವ ಹಾನಿ ಸಂಭವಿಸುವ ಸಾಧ್ಯತೆ ಇರುವ ಸ್ಥಳದಲ್ಲಿ ವಾಸವಿರುವ ಸದರಿ ನಿವಾಸಿಗಳನ್ನು ಯಾವ ಕಾಲಮಿತಿಯೊಳಗೆ ಸುರಕ್ಷಿತ ಪ್ರದೇಶಕ್ಕೆ ಶಾಶ್ವತವಾಗಿ ಸ್ಥಳಾಂತರ ಮಾಡಿ ಸೂಕ್ತ ಪರಿಹಾರ ಒದಗಿಸಲಾಗುವುದು? | ಸದರಿ ಸ್ಥಳದಲ್ಲಿ ವಾಸಿಸುತ್ತಿರುವ ನಿವಾಸಿಗಳಿಗೆ ಸುರಕ್ಷಿತ ಪ್ರದೇಶದಲ್ಲಿ ಶಾಶ್ವತ ಸ್ಥಳಾಂತರ ಕಲ್ಪಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಸ್ಥಳಾಂತರ ಕಾರ್ಯ ಪೂರ್ಣಗೊಳ್ಳುವವರೆಗೆ ಮಳೆಗಾಲದ ಸಂದರ್ಭದಲ್ಲಿ ಸದರಿ ಸ್ಥಳದಲ್ಲಿ ವಾಸವಿರುವರನ್ನು ಕಾಳಜಿ ಕೇಂದ್ರದಲ್ಲಿರಿಸಲು ಸೂಕ್ತ ವ್ಯವಸ್ಥೆ ಕಲ್ಪಿಸಲು ಕ್ರಮಕೈಗೊಳ್ಳಲಾಗಿದೆ. |

ಕಂಇ 108 ಟಿಎನ್ಆರ್ 2021

**(ಆರ್. ಅಶೋಕ)**
ಕಂದಾಯ ಸಚಿವರು